WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜನವರಿ ೧೯, ೨೦೧೨ (ಪುಷ್ಯ ೨೯, ಶಕ ವರ್ಷ ೧೯೩೩) | ಸಂಚಿಕೆ ೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿನ ಅಂತರ ರಾಜ್ಯ ಜಲ ವಿವಾದ ಹಾಗೂ ಮಾನವ ಹಕ್ಕುಗಳ ಶಾಖೆಯಲ್ಲಿನ ಅಪರ ಕಾರ್ಯದರ್ಶಿ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯೆಂದು ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ನಗರಾಭಿವೃದ್ಧಿ, ಪೌರಾಡಳಿತ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಪತ್ರ ಸಂಖ್ಯೆ : ನಕಾಸಂ/7445/2010-11, ದಿನಾಂಕ : 26-02-2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 27-07-2010ರ ಪತ್ರದಲ್ಲಿ ಮಾನ್ಯ ನಗರಾಭಿವೃದ್ಧಿ, ಪೌರಾಡಳಿತ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿನ ಅಂತರ ರಾಜ್ಯ ಜಲ ವಿವಾದ ಹಾಗೂ ಮಾನವ ಹಕ್ಕುಗಳ ಶಾಖೆಯಲ್ಲಿನ ಅಪರ ಕಾರ್ಯದರ್ಶಿ ಹುದ್ದೆಯ ಹೆಚ್ಚುವರಿ ಕಾರ್ಯಭಾರ ಮತ್ತು ಜವಾಬ್ದಾರಿಯನ್ನು ಗಮನಿಸಿ ಹಾಗೂ ಇಲಾಖೆಯನ್ನು ಬಲಪಡಿಸುವ ಸಲುವಾಗಿ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿನ ಅಂತರ ರಾಜ್ಯ ಜಲ ವಿವಾದ ಹಾಗೂ ಮಾನವ ಹಕ್ಕುಗಳ ಶಾಖೆಯಲ್ಲಿನ ಅಪರ ಕಾರ್ಯದರ್ಶಿ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆ ವೇತನ ಶ್ರೇಣಿ ರೂ. 28,275-39,900 ರಲ್ಲಿ ಮೇಲ್ದರ್ಜೆಗೇರಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 219 ಸಅಸೇ 2011, ಬೆಂಗಳೂರು, ದಿನಾಂಕ: 02-11-2011**

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿನ ಅಂತರ ರಾಜ್ಯ ಜಲ ವಿವಾದ ಹಾಗೂ ಮಾನವ ಹಕ್ಕುಗಳ ಶಾಖೆಯಲ್ಲಿನ ಅಪರ ಕಾರ್ಯದರ್ಶಿ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆ ವೇತನ ಶ್ರೇಣಿ ರೂ. 28,275-39,900 ರಲ್ಲಿ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 980 ಸೇ-3/2011, ದಿನಾಂಕ : 21-09-2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು-3)

ಪಿ.ಆರ್. ನಂ. 2643

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಸರಬರಾಜು ಕಂಪನಿಗಳಲ್ಲಿ "ಪುನಾರಚಿತ ತ್ವರಿತ ವಿದ್ಯುತ್ ಅಭಿವೃದ್ಧಿ ಹಾಗೂ ಸುಧಾರಣಾ ಯೋಜನೆಯ" (Restructured-Accelerated Power Development and Reforms Programme) ಅನುಷ್ಠಾನಕ್ಕೆ ಭಾರತ ಸರ್ಕಾರದಿಂದ ಮಂಜೂರಾತಿಯಾದ ಹಣಕ್ಕೆ "ರಾಜ್ಯ ಸರ್ಕಾರದ ಭರವಸೆ" (State Government Guarantee) ನೀಡುವ ಬಗ್ಗೆ.

**ಓದಲಾಗಿದೆ :**
1. ಬೆಸ್ಕಾಂ ರವರ ಪತ್ರ ಸಂಖ್ಯೆ : CGM(P)/GM(F&C)/BC-46/1322(F)/2010-11/4884 ದಿನಾಂಕ : 25–11–2010.
2. ಹೆಸ್ಕಾಂ ರವರ ಪತ್ರ ಸಂಖ್ಯೆ : HESCOM/GM(TA & HRD)/EE-6/AEE/END/10-11/ 5288-92 ದಿನಾಂಕ : 12–7–2010.
3. ಮೆಸ್ಕಾಂ ರವರ ಪತ್ರ ಸಂಖ್ಯೆ : SE(T)/AEE(EBC)/R-APDRP/2010-11/4479-80, ದಿನಾಂಕ : 13–5–2010.
4. PFC ಯವರ ಪತ್ರ ಸಂಖ್ಯೆ : 02 : 10 : R-APDRP : 2009 : 13 : ಕರ್ನಾಟಕ : 20–10–2010.

**ಪ್ರಸ್ತಾವನೆ :**

1. ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ವಿದ್ಯುತ್ ಜಾಲವನ್ನು ಬಲಪಡಿಸುವುದು ಹಾಗೂ ಒಟ್ಟಾರೆ ವಾಣಿಜ್ಯ ಮತ್ತು ತಾಂತ್ರಿಕ ನಷ್ಟವನ್ನು ಗಣನೀಯವಾಗಿ ಕಡಿಮೆ ಮಾಡುವ ಮಹತ್ತರವಾದ ಕಾರ್ಯಕ್ರಮವನ್ನು ಭಾರತ ಸರ್ಕಾರವು ಹನ್ನೊಂದನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ "ಪುನಾರಚಿತ ತ್ವರಿತ ವಿದ್ಯುತ್ ಅಭಿವೃದ್ಧಿ ಹಾಗೂ ಸುಧಾರಣಾ ಯೋಜನೆಯನ್ನು" (ಆರ್–ಎಪಿಡಿಆರ್‌ಪಿ) ಅನುಷ್ಠಾನಗೊಳಿಸಲಾಗುತ್ತಿದೆ. ನಷ್ಟವನ್ನು ಕಡಿತಗೊಳಿಸುವಲ್ಲಿ ನಿಖರ ಹಾಗೂ ಪ್ರದರ್ಶಿಸಬಹುದಾದ ಕಾರ್ಯನಿರ್ವಹಣೆ ಈ ಯೋಜನೆಯ ಕೇಂದ್ರ ಬಿಂದುವಾಗಿರುತ್ತದೆ. ಈ ಯೋಜನೆಯನ್ನು ಎರಡು ಹಂತಗಳಲ್ಲಿ, ಭಾಗ–ಎ ಮತ್ತು ಭಾಗ–ಬಿ ಯಾಗಿ ಅನುಷ್ಠಾನಗೊಳಿಸಲಾಗುತ್ತಿದ್ದು, 30,000ಕ್ಕೂ ಹೆಚ್ಚು ಜನಸಂಖ್ಯೆಯುಳ್ಳ ನಗರ ಹಾಗೂ ಪಟ್ಟಣ ಪ್ರದೇಶಗಳು ಈ ಯೋಜನೆಯ ವ್ಯಾಪ್ತಿಗೊಳಪಡಿಸಲು ಉದ್ದೇಶಿಸಲಾಗಿದೆ.

2. ಮೊದಲನೇ ಹಂತದ "ಭಾಗ–ಎ" ರಲ್ಲಿ ಇಂಧನ ಲೆಕ್ಕ ತಪಾಸಣೆ/ಪರಿಶೋಧನೆ ಹಾಗೂ ಮಾಹಿತಿ ತಂತ್ರಜ್ಞಾನ ಆಧಾರಿತ ಗ್ರಾಹಕ ಸೇವಾ ಕೇಂದ್ರಗಳಲ್ಲಿ ತಳಹದಿ ದತ್ತಾಂಶ ಮತ್ತು ಮಾಹಿತಿ ಅನ್ವಯಿಕೆಗಳನ್ನು ಸ್ಥಾಪಿಸುವ ಯೋಜನೆಗಳು ಇದರಲ್ಲಿ ಒಳಗೊಂಡಿದ್ದು, ಎರಡನೇ ಹಂತದ "ಭಾಗ–ಬಿ"ರ ಉದ್ದೇಶವು ವಿತರಣಾ ವ್ಯವಸ್ಥೆಯನ್ನು ಸದೃಢಗೊಳಿಸುವ ಯೋಜನೆಗಳನ್ನು ಒಳಗೊಂಡಿರುತ್ತದೆ.

3. ಈ ಯೋಜನೆಯ ಮೊದಲನೇ ಹಂತದ ಭಾಗ–ಎ ರಲ್ಲಿ, ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಒಟ್ಟು 100 ಪಟ್ಟಣಗಳು ಗುರುತಿಸಿದ್ದು, ಯೋಜನೆಯ ವೆಚ್ಚ ರೂ. 469.03 ಕೋಟಿಗಳು ಆಗಿರುತ್ತವೆ. ಯೋಜನೆಯ ಭಾಗ–ಎ ರ ಅನುಷ್ಠಾನಕ್ಕೆ ಭಾರತ ಸರ್ಕಾರದಿಂದ ರೂ. 391.2 ಕೋಟಿಗಳಿಗೆ ಸಾಲದ ಅನುಮೋದನೆ ದೊರೆತ್ತಿದ್ದು, ಉಳಿದ ರೂ. 77.9 ಕೋಟಿ ಹಣವನ್ನು ಕಂಪನಿಗಳು ಭರಿಸುವುದಾಗಿರುತ್ತದೆ.

ಭಾಗ–ಎ ರಲ್ಲಿ, ವಿದ್ಯುತ್ ಸರಬರಾಜು ಕಂಪನಿಯವಾರು ಮಂಜೂರಾತಿ ವಿವರಗಳು ಈ ಕೆಳಕಂಡಂತಿವೆ :–

(ರೂ. ಕೋಟಿಗಳಲ್ಲಿ)

| ಸಂಸ್ಥೆಗಳು | ಪಟ್ಟಣಗಳ ಸಂಖ್ಯೆ | ಮಂಜೂರಾದ ಸಾಲ | ಎಸ್ಕಾಂಗಳ ಸ್ವಂತ ವೆಚ್ಚ | ಒಟ್ಟಾರೆ ಯೋಜನಾ ವೆಚ್ಚ |
|---|---|---|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ (ಬೆಸ್ಕಾಂ) | 25 | 261.36 | 20.8 | 282.16 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ (ಮೆಸ್ಕಾಂ) | 11 | 12.07 | 55.3 | 67.37 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ (ಸೆಸ್ಕ) | 12 | 27.73 | 0.03 | 27.76 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ (ಹೆಸ್ಕಾಂ) | 31 | 52.62 | 0.65 | 53.27 |
| ಗುಲಬರ್ಗಾ ವಿದ್ಯುತ್ ಸರಬರಾಜು ಕಂಪನಿ (ಜೆಸ್ಕಾಂ) | 21 | 37.37 | 1.1 | 38.47 |
| **ಒಟ್ಟು** | **100** | **391.2** | **77.9** | **469.03** |

4. ಈ ಯೋಜನೆಯ ಎರಡನೇ ಹಂತದ ಭಾಗ–ಬಿ ರಲ್ಲಿ, ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಒಟ್ಟು 88 ಪಟ್ಟಣಗಳು ಆಯ್ಕೆಯಾಗಿದ್ದು, ಯೋಜನೆಯ ವೆಚ್ಚ ರೂ. 948.99 ಕೋಟಿ ಗಳಾಗಿರುತ್ತವೆ. ಯೋಜನೆಯ ಭಾಗ–ಬಿ ರ ಅನುಷ್ಠಾನಕ್ಕೆ ಭಾರತ ಸರ್ಕಾರದಿಂದ ಈಗಾಗಲೇ ರೂ. 237.25 ಕೋಟಿಗಳಿಗೆ ಸಾಲದ ಅನುಮೋದನೆ ದೊರತ್ತಿದ್ದು ಉಳಿದ ರೂ. 711.74 ಕೋಟಿಗಳು ಹಣವನ್ನು ಕಂಪನಿಗಳು ಭರಿಸುವುದಾಗಿರುತ್ತದೆ.

ಭಾಗ–ಬಿ ರಲ್ಲಿ ವಿದ್ಯುತ್ ಸರಬರಾಜು ಕಂಪನಿವಾರು ಮಂಜೂರಾತಿ ವಿವರಗಳು ಈ ಕೆಳಕಂಡಂತಿವೆ :–

(ರೂ. ಕೋಟಿಗಳಲ್ಲಿ)

| ಸಂಸ್ಥೆಗಳು | ಪಟ್ಟಣಗಳ ಸಂಖ್ಯೆ | ಕೇಂದ್ರ ಸರ್ಕಾರದ ಭಾಗ (ಸಾಲದ ರೂಪದಲ್ಲಿ) | ಎಸ್ಕಾಂಗಳ ಸ್ವಂತ ವೆಚ್ಚ | ಒಟ್ಟಾರೆ ಯೋಜನಾ ವೆಚ್ಚ |
|---|---|---|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 24 | 72.57 | 217.71 | 290.28 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 12 | 44.89 | 134.67 | 179.56 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 31 | 69.59 | 208.77 | 278.36 |
| ಗುಲಬರ್ಗಾ ವಿದ್ಯುತ್ ಸರಬರಾಜು ಕಂಪನಿ | 21 | 50.20 | 150.59 | 200.79 |
| **ಒಟ್ಟು** | **88** | **237.25** | **711.74** | **948.99** |

5. ಯೋಜನೆಯ ಅನುಷ್ಠಾನಕ್ಕೆ ಹಣದ ವ್ಯವಸ್ಥೆ (Funding mechanism) :–

* ಭಾರತ ಸರ್ಕಾರವು ಪುನಾರಚಿತ ತ್ವರಿತ ವಿದ್ಯುತ್ ಅಭಿವೃದ್ಧಿ ಹಾಗು ಸುಧಾರಣಾ ಕಾರ್ಯಕ್ರಮದ ಭಾಗ–ಎ ಗೆ ಶೇ 100 ಸಾಲ ಮತ್ತು ಭಾಗ–ಬಿ ಗೆ ಶೇ. 25 ರವರೆಗೆ ಸಾಲ ಒದಗಿಸುತ್ತದೆ. ಭಾರತ ಸರ್ಕಾರದ ಸಾಲವನ್ನು ಹಣಕಾಸು ಸಂಸ್ಥೆಗಳ ಮೂಲಕ ಸಂಬಂಧಿತ ಯೋಜನೆಗೆ ಒದಗಿಸಲಾಗುವುದು. ಈ ಯೋಜನೆಗೆ Power Finance Corporation Ltd., (P.F.C.) ಯು ನೊಡಲ್ ಸಂಸ್ಥೆ (Nodal Agency) ಯಾಗಿರುತ್ತದೆ.

6. ಭಾರತ ಸರ್ಕಾರದ ಸಾಲ ಅನುದಾನವಾಗಿ ಪರಿವರ್ತನೆಗೆ (Conversion of GOI loan to grant) :–

* ನಿಗಧಿತ ಕಾಲಮಿತಿಯೊಳಗೆ ಅಗತ್ಯ ತಳಹದಿ ದತ್ತಾಂಶ ವ್ಯವಸ್ಥೆಯನ್ನು ಸ್ಥಾಪಿಸಿದನಂತರ ಹಾಗೂ ಮೂರನೇ ವ್ಯಕ್ತಿ ಸ್ವತಂತ್ರ ಮೌಲ್ಯಮಾಪನ ಸಂಸ್ಥೆ ನಿಖರವಾಗಿ ಪರಿಶೀಲಿಸಿದ ನಂತರ ಭಾಗ "ಎ" ಯೋಜನೆಗಳು ಭಾರತ ಸರ್ಕಾರದ ಸಾಲ ಸಂಪೂರ್ಣವಾಗಿ (100%) ಅನುದಾನವಾಗಿ ಪರಿವರ್ತಿತವಾಗುತ್ತದೆ.

* ಯೋಜನಾ ಪ್ರದೇಶದಲ್ಲಿ ಒಟ್ಟು ತಾಂತ್ರಿಕ ಮತ್ತು ವಾಣಿಜ್ಯ ನಷ್ಟದ ಪ್ರಮಾಣ ಶೇ 15 ಸಾಧಿಸಿ ಮೂರನೇ ವ್ಯಕ್ತಿ ಸ್ವತಂತ್ರ ಮೌಲ್ಯಮಾಪನ ಐದು ವರ್ಷಗಳ ಅವಧಿಗೆ ನಿಖರವಾಗಿ ಎತ್ತಿ ಹಿಡಿಯುವ ಆಧಾರದ ಮೇರೆಗೆ ಭಾಗ "ಬಿ" ಯೋಜನೆಗಳ ಶೇ 50 ರಷ್ಟು ಸಾಲವನ್ನು ಐದು ಸಮನಾದ ಕಂತುಗಳಲ್ಲಿ ಅನುದಾನವನ್ನಾಗಿ ಪರಿವರ್ತಿಸಲಾಗುವುದು.

* ವಿದ್ಯುತ್ ಪೂರೈಕೆ ಸಂಸ್ಥೆ ಒಂದು ನಿರ್ದಿಷ್ಟ ವರ್ಷದಲ್ಲಿ ಶೇ. 15 ರಷ್ಟು ತಾಂತ್ರಿಕ ಮತ್ತು ವಾಣಿಜ್ಯ ನಷ್ಟದ ಪ್ರಮಾಣವನ್ನು ಸಾಧಿಸದಿದ್ದಲ್ಲಿ ಪ್ರಮಾಣಾನುಸಾರವಾಗಿ ಸಾಲದ ಕಂತನ್ನು ಅನುದಾನವಾಗಿ ಪರಿವರ್ತಿಸುವುದನ್ನು ಕಡಿತಗೊಳಿಸಲಾಗುವುದು.

7. ಆರ್–ಎಪಿಡಿಆರ್‌ಪಿ ಯೋಜನೆಯ ಅನುಷ್ಠಾನಕ್ಕೆ ಎಲ್ಲಾ ಕಂಪನಿಗಳಲ್ಲಿ "ಒಪ್ಪಂದ ವಿವರಣಾ ಪತ್ರ" (MOU-Quadripartite agreement) ಮಾಡಿಕೊಂಡಿದ್ದು, "ಒಪ್ಪಂದ ವಿವರಣಾ ಪತ್ರದ" ಪ್ರಕಾರ ಎಲ್ಲಾ ಕಂಪನಿಗಳು Escrow A/c, Charge on asset, ಮತ್ತು " ರಾಜ್ಯ ಸರ್ಕಾರದ ಭರವಸೆಯ" ಅನುಮೋದನೆ (State Government Guarantee) ಗಳ ದಸ್ತವೇಜುಗಳನ್ನು P.F.C. ಯವರಿಗೆ ಸಲ್ಲಿಸ ಬೇಕಾಗಿದೆ ಒಪ್ಪಂದ ವಿವರಣಾ ಪತ್ರದ ಪ್ರಕಾರ, "ವಿದ್ಯುತ್ ಸರಬರಾಜು ಕಂಪನಿಗಳು ಈ ಯೋಜನೆಗೆ ತೆಗೆದುಕೊಂಡ ಸಾಲವನ್ನು ಮರುಪಾವತಿ ಮಾಡದಿದ್ದಲ್ಲಿ, ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳಿಗೆ ನೀಡುವ ಯೋಜನಾ ಸಹಾಯ ಧನದಲ್ಲಿ "ವಿದ್ಯುತ್ ಸರಬರಾಜು ಕಂಪನಿಗಳು ತೆಗೆದುಕೊಂಡ ಸಾಲವನ್ನು ಮುರಿದುಕೊಳ್ಳುವುದಾಗಿರುತ್ತದೆ".

8. ಮೇಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ, ಪ್ರಸ್ತುತ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 16 ವಿಎಸ್‌ಸಿ 2011, ಬೆಂಗಳೂರು, ದಿನಾಂಕ : 10–11–2011**

ಎಲ್ಲಾ ವಿತರಣಾ ಕಂಪನಿಗಳಲ್ಲಿ ಆರ್–ಎ.ಪಿ.ಡಿ.ಆರ್.ಪಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದು, ಈ ಯೋಜನೆಯ ಲಾಭವನ್ನು ಪಡೆಯುವುದಕ್ಕಾಗಿ ಕೇಂದ್ರ ಸರ್ಕಾರದ ಅನುಮೋದಿತ ಸಂಪೂರ್ಣ ಸಾಲದ ಮೊತ್ತ, ರೂ. 628.45 ಕೋಟಿಗಳಿಗೆ ರಾಜ್ಯ ಸರ್ಕಾರದ ಭರವಸೆಯನ್ನು ನೀಡಲಾಗಿದೆ. ಇದರಲ್ಲಿ ಈ ಕೆಳಗಿನವುಗಳು ಒಳಗೊಂಡಿವೆ :

- ಆರ್–ಎಪಿಡಿಆರ್‌ಪಿ ಭಾಗ–ಎ ಅನುಷ್ಠಾನಕ್ಕಾಗಿ ರೂ. 391.2 ಕೋಟಿಗಳು
- ಆರ್–ಎಪಿಡಿಆರ್‌ಪಿ ಭಾಗ–ಬಿ ಅನುಷ್ಠಾನಕ್ಕಾಗಿ ರೂ. 237.25 ಕೋಟಿಗಳು

ವಿದ್ಯುತ್ ಸರಬರಾಜು ಕಂಪನಿವಾರು ರಾಜ್ಯ ಸರ್ಕಾರದ ಭರವಸೆಯ ಮೊತ್ತದ ವಿವರಗಳು ಕೆಳಗಿನಂತಿವೆ.

(ರೂ. ಕೋಟಿಗಳಲ್ಲಿ)

| ಸಂಸ್ಥೆಗಳು | ಭಾಗ–ಎ | ಭಾಗ–ಬಿ |
|---|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ (ಬೆಸ್ಕಾಂ) | 261.36 | 72.57 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ (ಮೆಸ್ಕಾಂ) | 12.07 | – |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ (ಸೆಸ್ಕ) | 27.73 | 44.89 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ (ಹೆಸ್ಕಾಂ) | 52.62 | 69.59 |
| ಗುಲಬರ್ಗಾ ವಿದ್ಯುತ್ ಸರಬರಾಜು ಕಂಪನಿ (ಜೆಸ್ಕಾಂ) | 37.37 | 50.20 |
| **ಒಟ್ಟು** | **391.2** | **237.25** |

* ಆರ್–ಎ.ಪಿ.ಡಿ.ಆರ್.ಪಿ (ಭಾಗ–ಎ ಮತ್ತು ಭಾಗ–ಬಿ) ಯೋಜನೆಯ ಒಟ್ಟು ಸಾಲದ ಮೊತ್ತದ ಮೇಲೆ ಶೇ. 1 ರಷ್ಟು ರಾಜ್ಯ ಸರ್ಕಾರ ಭರವಸೆ ಶುಲ್ಕವನ್ನು ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ರಾಜ್ಯ ಸರ್ಕಾರಕ್ಕೆ ಪಾವತಿಸುವುದು.

* ವಿದ್ಯುತ್ ಸರಬರಾಜು ಕಂಪನಿಗಳು ಭರವಸೆಯ ಶುಲ್ಕವನ್ನು ಪಾವತಿಸದ ಪಕ್ಷದಲ್ಲಿ ರಾಜ್ಯ ಸರ್ಕಾರದಿಂದ ವಿದ್ಯುತ್ ಸರಬರಾಜು ಕಂಪನಿಗೆ ನೀಡಬೇಕಾಗಿರುವ ಮೊತ್ತದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

ಪ್ರಸ್ತುತ ಆದೇಶವನ್ನು ಆರ್ಥಿಕ ಇಲಾಖೆಯ ಯು.ಓ. ಟಿಪ್ಪಣಿ ಸಂಖ್ಯೆ : 228 Exp-1/11, ದಿನಾಂಕ : 14–3–2011 ಮತ್ತು ನಂ. FD 710 Exp-1/11, ದಿನಾಂಕ : 23–5–2011 ರ ಸಹಮತಿಯೊಂದಿಗೆ ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ENERGY SECRETARIAT

**Sub:** "State Government guarantee" for the loan amount sanctioned by Government of India for Implementation of Restructured-Accelerated Power Development and Reforms Programme (R-APDRP) by Electricity Supply companies in the state.

***Read:*** 1. Lr. No. CGM(P)/GM(F&C)/BC-46/1322(F)/2010-11/4884 Dated : 25-11-2010 of BESCOM

**2.** Lr. No. HESCOM/GMT(TA &HRD)/EE-6/AEE/END/10-11/5288-92 dated 12-7-2010 of HESCOM

**3.** Lr. No. SE(T)/AEE(EBC)/R-APDRP/2010-11/4479-80 dated 13-5-2010 of MESCOM

**4.** Lr. No. 02:10 : R-APDRP : 2009 : 13 : Karnataka dated 20-10-2010 of PFC.

**PREAMBLE:**

1. To strengthen the distribution network of the Electricity Supply companies and to reduce overall AT & C Losses, the GOI during XI Plan has implemented Restructured-Accelerated Power Development and Reforms Programme. The focus of the programme shall be actual, demonstrable performance in terms of sustained loss reduction. R-APDRP is implemented in two stages, Part-A & Part-B covering urban areas-towns and cities with population more than 30,000.

2. Under first stage, Part-A includes the projects for establishment of base line data and IT applications for energy accounting/auditing & IT based consumer service centres. Under second stage, Part-B includes distribution strengthening projects.

3. For implementation of R-APDRP in first stage under Part-A, 100 towns are identified in all ESCOMs for total investment of Rs. 469.03 crores. Government of India has sanctioned a loan of Rs. 391.2 crores and balance amount of Rs. 77.9 crores are met by the companies from their own funds.

The details of sanctioned projects in all Electricity Supply Companies (ESCOMs) under Part-A is as shown :

(Amount in Rs. Crores)

| Company | No. of Towns | Sanctioned amount | ESCOMs own cost | Total Project Cost |
|---|---|---|---|---|
| Bangalore Electricity Supply Company (BESCOM) | 25 | 261.36 | 20.8 | 282.16 |
| Mangalore Electricity Supply Company (MESCOM) | 11 | 12.07 | 55.3 | 67.37 |
| Chumundeshwari Electricity Supply Corp. (CESC) | 12 | 27.73 | 0.03 | 27.76 |
| Hubli Electricity Supply Company (HESCOM) | 31 | 52.62 | 0.65 | 53.27 |
| Gulburga Electricity Supply Company (GESCOM) | 21 | 37.37 | 1.1 | 38.47 |
| **Total** | **100** | **391.2** | **77.9** | **469.03** |

4. For implementation of R-APDRP in second stage under Part-B, 88 towns are identified in all ESCOMs for an investment of Rs. 948.99 crores. For implementation of Part-B the GOI has sanctioned a loan of Rs. 237.25 crores and the balance amount of Rs. 711.74 crores is to be met by the companies from their own source of financing. The loan shall be arranged either through PFC or any other Financial Institutions. The details of projects sanctioned in all ESCOMs under Part-B are as shown :

(Amount in Rs. Crores)

| Company | No. of Towns | Central Share (In the form of loan) | ESCOMs own cost | Total Project Cost |
|---|---|---|---|---|
| Bangalore Electricity Supply Company | 24 | 72.57 | 217.71 | 290.28 |
| Chumundeshwari Electricity Supply Corp. | 12 | 44.89 | 134.67 | 179.56 |
| Hubli Electricity Supply Company | 31 | 69.59 | 208.77 | 278.36 |
| Gulburga Electricity Supply Company (GESCOM) | 21 | 50.20 | 150.59 | 200.79 |
| **Total** | **88** | **237.25** | **711.74** | **948.99** |

5. Funding mechanism :

* GOI will provide 100% loan for Part-A of the R_APDRP scheme and up to 25% of loan for Part-B. The entire loan from GOI will be routed through Financial institution. The power Finance Corporation Ltd., (PFC) is the Nodal agency for implementation of R-APDRP.

6. Conversion of GOI loan into grant

* The entire loan amount of GOI (100%) for Part-A of the project shall be converted into grant after establishment of the required base line data system within a stipulated time frame and duly verified by Third Party inspection & Evaluation Agency (TPIEA).

* Up to 50% loan for Part-B projects shall be converted into grants in five equal tranches on achieving 15% AT & C loss in the project area duly verified by Third Party inspection & Evaluation Agency (TPIEA) on a sustainable basis for a period of five years.

* If the utility fails to achieve or sustain the 15% AT & C loss target in a particular year, that year's tranche of conversion of loan to grant will be reduced in proportion to the shortfall in achieving 15% AT & C loss target from starting AT & C loss figure.

7. All ESCOMs have executed Memorandum of Understanding (Quadripartite agreement) towards implementation of R-APDRP. According to the MOU, all companies have to furnish the documents of Escrow A/c, Charge on Asset and State Government guarantee to the Nodal Agency-PFC. The documents of ESCROW A/c, Charge on Asset has to be furnished to PFC by the respective utilities. The State Government shall undertake that in case of non payment of loan amount by the utilities, all outstanding dues of the utilities shall be recovered from the Central plan assistance due to the State.

8. In view of above, the matter is examined and hence the following order.

**GOVERNMENT ORDER NO. EM 16 VSC 2011, BANGALORE, DATED: 10-11-2011.**

The State Government Guarantee is provided for the total sanctioned loan amount by Government of India of Rs. 628.45 crores for implementation of R-APDRP in all ESCOMs in order to derive the benefits of the scheme. The State Government guarantee includes :

*Rs. 391.2 crores for implementation of R-APDRP under Part-A.

*Rs. 237.25 crores for implementation of R-APDRP under Part-B.

ESCOM wise amount guaranteed by State Government is as shown below :

(Amount in Rs. Crores)

| Company | Part-A | Part-B |
|---|---|---|
| Bangalore Electricity Supply Company (BESCOM) | 261.36 | 72.27 |
| Mangalore Electricity Supply Company (MESCOM) | 12.07 | - |
| Chumundeshwari Electricity Supply Corp. (CESC) | 27.73 | 44.89 |
| Hubli Electricity Supply Company (HESCOM) | 52.62 | 69.59 |
| Gulburga Electricity Supply Company (GESCOM) | 37.37 | 50.20 |
| **Total** | **391.2** | **237.25** |

*All ESCOMs to pay 1% guarantee fee for the amount guaranteed by the State Government for the loan under R-APDRP (Part-A & Part-B) as above.

*The Guarantee fee will be adjusted out of the amount due from Government to ESCOMs if the ESCOMs fails to pay the same.

This order is issued with the concurrence of Finance Department vide U.O. Note No. 228 Exp-1/11 dated 14-3-2011 & No. FD 710 Exp-1/11 dated : 23-5-2011.

By Order and in the name of the Governor of Karnataka

**(SURESH. B. KRISHNAPPANAVR)**

Under Secretary to Government

Energy Department.

PR No. 2716

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ನೀಡಲು ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ವಿಯುಇ 9 ವಿತ್ರಮ 2009, ದಿನಾಂಕ : 20-2-2009.

2. ಸರ್ಕಾರಿ ಆದೇಶ ಸಂಖ್ಯೆ : ವಿಯುಇ 9 ವಿತ್ರಮ 2009, ದಿನಾಂಕ : 12-11-2009.

**ಪ್ರಸ್ತಾವನೆ :**

ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಪ್ರೋತ್ಸಾಹಿಸಲು ಕರ್ನಾಟಕ ಸರ್ಕಾರವು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ವಿಜ್ಞಾನಿಗಳನ್ನು ಗೌರವಿಸಿ ಪ್ರೋತ್ಸಾಹಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಪ್ರೊ. ಸಿ.ಎನ್.ಆರ್.ರಾವ್, ಪ್ರಧಾನ ಮಂತ್ರಿಗಳ ವೈಜ್ಞಾನಿಕ ಸಲಹಾ ಪರಿಷತ್ತಿನ ಅಧ್ಯಕ್ಷರು ಹಾಗೂ ರಾಷ್ಟ್ರೀಯ ಸಮಿತಿಯ ಪ್ರಾಧ್ಯಪಕರು ಇವರನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿಸಲಾಗಿತ್ತು ಮತ್ತು ಮೇಲೆ ಓದಲಾದ (2)ರ ಆದೇಶದಲ್ಲಿ ಈ ಸಮಿತಿಗೆ 5 ಜನ ಸದಸ್ಯರನ್ನಾಗಿ ನೇಮಿಸಲಾಗಿತ್ತು. ಅವರಲ್ಲಿ ಒಬ್ಬ ಸದಸ್ಯರಾದ ಪ್ರೊ. ರೊದ್ಧಂ ನರಸಿಂಹ, ಅಧ್ಯಕ್ಷರು, ಇಂಜಿನಿಯರಿಂಗ್ ಮೆಕ್ಯಾನಿಕ್ ವಿಭಾಗ, ಜೆ.ಎನ್.ಸಿ.ಎ.ಎಸ್.ಆರ್. ಜಕ್ಕೂರು, ಬೆಂಗಳೂರು ಇವರ ಬದಲಾಗಿ ಪ್ರಸ್ತುತ ಪ್ರೊ.ಎಂ.ಆರ್.ಎಸ್. ರಾವ್, ಅಧ್ಯಕ್ಷರು, ಇಂಜಿನಿಯರಿಂಗ್ ಮೆಕ್ಯಾನಿಕ್ ವಿಭಾಗ, ಜೆ.ಎನ್.ಸಿ.ಎ.ಎಸ್.ಆರ್. ಜಕ್ಕೂರು, ಬೆಂಗಳೂರು ಇವರನ್ನು ನೇಮಿಸಿ ಸಮಿತಿ ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ವಿಯುಇ 168 ವಿತ್ರಮ 2011, ಬೆಂಗಳೂರು, ದಿನಾಂಕ : 29-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಪ್ರೊ. ಸಿ.ಎನ್.ಆರ್.ರಾವ್‌ರವರ ಅಧ್ಯಕ್ಷತೆಯಲ್ಲಿ ರಚಿಸಲಾದ ವಿಜ್ಞಾನಿ ಮತ್ತು ಇಂಜಿನಿಯರುಗಳ ರಾಜ್ಯ ಪ್ರಶಸ್ತಿಗಳಿಗೆ ಅರ್ಹ ಅಭ್ಯರ್ಥಿಗಳ ಆಯ್ಕೆ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಲಾಗಿದೆ.

1. ಪ್ರೊ. ಸಿ.ಎನ್.ಆರ್. ರಾವ್ — ಅಧ್ಯಕ್ಷರು
ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು
ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್
ಮತ್ತು ಗೌರವ ಅಧ್ಯಕ್ಷರು, ಜವಾಹರ್‌ಲಾಲ್ ನೆಹರು
ವಿಜ್ಞಾನ ಸಂಶೋಧನಾ ಕೇಂದ್ರ, ಬೆಂಗಳೂರು

| | | |
|---|---|---|
| 2. | ಪ್ರೊ. ಎಂ.ಆರ್.ಎಸ್. ರಾವ್, ಅಧ್ಯಕ್ಷರು, ಇಂಜಿನಿಯರಿಂಗ್ ಮೆಕ್ಯಾನಿಕ್ ವಿಭಾಗ, ಜೆ.ಎನ್.ಸಿ.ಎಸ್.ಆರ್. ಜಕ್ಕೂರು, ಬೆಂಗಳೂರು | ಸದಸ್ಯರು |
| 3. | ಪ್ರೊ. ಬಿ.ಜಿ. ಮೂಲಿಮನಿ, ಕುಲಪತಿಗಳು ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, | ಸದಸ್ಯರು |
| 4. | ಪ್ರೊ. ಹೆಚ್.ಎ. ರಂಗನಾಥ ಎನ್.ಎ.ಎ.ಸಿ. ನಾಗರಭಾವಿ, ಬೆಂಗಳೂರು | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಅಥವಾ ಅವರ ಪ್ರತಿನಿಧಿ | ಸದಸ್ಯರು |
| 6. | ಪ್ರೊ. ಎಂ.ಎಸ್. ಮೋಹನ್ ಕುಮಾರ್ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ, ಭಾರತೀಯ ವಿಜ್ಞಾನ ಸಂಸ್ಥೆ ಆವರಣ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಗೆ ಅಥವಾ ಮುಂದಿನ ಆಯ್ಕೆ ಸಮಿತಿಯ ಪುನರ್ ರಚನೆ ಆಗುವವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್‌ರಾವ್ ಕೇಸರ್‌ಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2717

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬಿ.ಟಿ. ಫಿನಿಷಿಂಗ್ ಸ್ಕೂಲ್ ಸ್ಥಾಪನೆಗಾಗಿ 2ನೇ ಮತ್ತು ಅಂತಿಮ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 58 ಎಂಡಿಇ 2008, ದಿನಾಂಕ : 29–7–2011.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಇ 2010 (ಭಾ), ದಿನಾಂಕ : 3–6–2010 ಮತ್ತು 4–12–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ : 19–2–2011 ಮತ್ತು ಮಾತಂಇ 18 ಎಂಡಿಎ 2011 (ಭಾ), ದಿನಾಂಕ : 3–5–2011.
4. ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಇಒ–ಬಿಟಿ/ಬಿಟಿಎಫ್ಎಸ್/50/2011–12, ದಿನಾಂಕ : 29–10–2011.

**ಪ್ರಸ್ತಾವನೆ :**

ಸಹಸ್ರಮಾನದ ಜೈವಿಕ ನೀತಿ–2 ರಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೂಕ್ತ ಪಠ್ಯದೊಂದಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿ, ವಿಶೇಷವಾಗಿ ಪದವೀದರರು ಮತ್ತು ಸ್ನಾತಕೋತ್ತರ ಪದವೀದರರು ನೌಕರಿಗೆ ಯೋಗ್ಯವಾದ ಕೌಶಲ್ಯವನ್ನು ಒಳಗೊಂಡ ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಯನ್ನು ರಾಜ್ಯದಲ್ಲಿ ಘೋಷಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 3–6–2010 ಮತ್ತು ದಿನಾಂಕ : 4–12–2010 ರಂದು ಸರ್ಕಾರವು 12 ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಗಾಗಿ ಅನುಮೋದನೆ ನೀಡಲಾಗಿದೆ.

ಈ ನೀತಿಯಂತೆ ರಾಜ್ಯವು ತನ್ನ ಸಹಕಾರವನ್ನು ಒಂದು ಸಂಸ್ಥೆಗೆ ಗರಿಷ್ಠ ರೂ. 1.00 ಕೋಟಿಯಂತೆ 25% ರಷ್ಟು ಮೊತ್ತಕ್ಕೆ ಮಿತಿಗೊಳಿಸಿದೆ. ಹಾಗೂ ಉಳಿದ 75% ರಷ್ಟು ಮೊತ್ತವನ್ನು ಸಂಸ್ಥೆಯು ಭರಿಸಬೇಕಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 19–2–2011 ರಲ್ಲಿ ರೂ. 275.00 ಲಕ್ಷಗಳನ್ನು ಮತ್ತು ಮಾತಂಇ 18 ಎಂಡಿಎ 2011(ಭಾ), ದಿನಾಂಕ : 3–5–2011 ರೂ. 325.00 ಲಕ್ಷಗಳನ್ನು ಸರ್ಕಾರವು ಒಟ್ಟು ರೂ. 6.00 ಕೋಟಿಯ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಿ ಕೆಬಿಟ್ಸ್ ಸಂಸ್ಥೆಯ ಮೂಲಕ 50% ರಷ್ಟು ಸಹಕಾರವನ್ನು 12 ಸಂಸ್ಥೆಗಳಿಗೆ ನೀಡಿದೆ.

ಮೇಲೆ (4)ರಲ್ಲಿ ಓದಲಾದ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ದಿನಾಂಕ : 29–10–2011ರಲ್ಲಿ Dayananda Sagar Institutions Bangalore ಮತ್ತು M.M. Arts & Sciences College, Sirsi ಈ ಎರಡು ಸಂಸ್ಥೆಗಳು ಉಪಯೋಗಿತಾ ಪತ್ರವನ್ನು ಸಲ್ಲಿಸಿದ್ದು, ಆದ್ದರಿಂದ ಎರಡನೇ ಮತ್ತು ಅಂತಿಮ ಕಂತಾದ ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ.ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಈ ಎರಡು ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 18 ಎಂಡಿಎ 2011, ಬೆಂಗಳೂರು, ದಿನಾಂಕ : 29–10–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ. ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಯ ಮೂಲಕ Dayananda Sagar Institutions Bangalore ಮತ್ತು M.M. Arts & Sciences College, Sirsi ಸಂಸ್ಥೆಗೆಗಳಿಗೆ ನೀಡಲು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–2–24 ಬಿಟಿ ಪಾಲಿಸಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ: 3–6–2010 ಮತ್ತು ದಿನಾಂಕ : 4–12–2010ರಲ್ಲಿನ ಷರತ್ತುಗಳನ್ನು ಶೈಕ್ಷಣಿಕ ಸಂಸ್ಥೆಗಳು ಅನುಸರಣೆ ಮಾಡಿದ ನಂತರ ಕೆಬಿಟ್ಸ್ ಸಂಸ್ಥೆಯು ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.
2. ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.
3. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಇ. ರಾಮಕೃಷ್ಣಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬಿ.ಟಿ. ಫಿನಿಷಿಂಗ್ ಸ್ಕೂಲ್ ಸ್ಥಾಪನೆಗಾಗಿ 2ನೇ ಮತ್ತು ಅಂತಿಮ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 58 ಎಂಡಿಎ 2008, ದಿನಾಂಕ : 29–7–2011.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 3–6–2010 ಮತ್ತು 4–12–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ : 19–2–2011 ಮತ್ತು ಮಾತಂಇ 18 ಎಂಡಿಎ 2011 (ಭಾ), ದಿನಾಂಕ : 3–5–2011.
4. ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಇಒ–ಬಿಟಿ/ಬಿಟಿಎಫ್‌ಎಸ್/47/2011–12, ದಿನಾಂಕ : 24–10–2011.

**ಪ್ರಸ್ತಾವನೆ :**

ಸಹಸ್ರಮಾನದ ಜೈವಿಕ ನೀತಿ–2 ರಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೂಕ್ತ ಪಠ್ಯದೊಂದಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿ, ವಿಶೇಷವಾಗಿ ಪದವೀದರರು ಮತ್ತು ಸ್ನಾತಕೋತ್ತರ ಪದವೀದರರು ನೌಕರಿಗೆ ಯೋಗ್ಯವಾದ ಕೌಶಲ್ಯವನ್ನು ಒಳಗೊಂಡ ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಯನ್ನು ರಾಜ್ಯದಲ್ಲಿ ಘೋಷಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 3–6–2010 ಮತ್ತು ದಿನಾಂಕ : 4–12–2010 ರಂದು ಸರ್ಕಾರವು 12 ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಗಾಗಿ ಅನುಮೋದನೆ ನೀಡಲಾಗಿದೆ.

ಈ ನೀತಿಯಂತೆ ರಾಜ್ಯವು ತನ್ನ ಸಹಕಾರವನ್ನು ಒಂದು ಸಂಸ್ಥೆಗೆ ಗರಿಷ್ಠ ರೂ. 1.00 ಕೋಟಿಯಂತೆ 25% ರಷ್ಟು ಮೊತ್ತಕ್ಕೆ ಮಿತಿಗೊಳಿಸಿದೆ. ಹಾಗೂ ಉಳಿದ 75% ರಷ್ಟು ಮೊತ್ತವನ್ನು ಸಂಸ್ಥೆಯು ಭರಿಸಬೇಕಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 19–2–2011 ರಲ್ಲಿ ರೂ. 275.00 ಲಕ್ಷಗಳನ್ನು ಮತ್ತು ಮಾತಂಇ 18 ಎಂಡಿಎ 2011(ಭಾ), ದಿನಾಂಕ : 3–5–2011 ರೂ. 325.00 ಲಕ್ಷಗಳನ್ನು ಸರ್ಕಾರವು ಒಟ್ಟು ರೂ. 6.00 ಕೋಟಿಯ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಿ ಕೆಬಿಟ್ಸ್ ಸಂಸ್ಥೆಯ ಮೂಲಕ 50% ರಷ್ಟು ಸಹಕಾರವನ್ನು 12 ಸಂಸ್ಥೆಗಳಿಗೆ ನೀಡಿದೆ.

ಮೇಲೆ (4)ರಲ್ಲಿ ಓದಲಾದ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ದಿನಾಂಕ : 24–10–2011ರಲ್ಲಿ Probiosys, Bangalore ಮತ್ತು Maharani Lakshmi Ammanni College for Women, Bangalore ಈ ಎರಡು ಸಂಸ್ಥೆಗಳು ಉಪಯೋಗಿತಾ ಪತ್ರವನ್ನು ಸಲ್ಲಿಸಿದ್ದು, ಆದ್ದರಿಂದ

ಎರಡನೇ ಮತ್ತು ಅಂತಿಮ ಕಂತಾದ ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ.ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಈ ಎರಡು ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 18 ಎಂಡಿಎ 2011, ಬೆಂಗಳೂರು, ದಿನಾಂಕ : 24–10–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ. ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಯ ಮೂಲಕ Probiosys, Bangalore ಮತ್ತು Maharani Lakshmi Ammanni College for Women, Bangalore ಸಂಸ್ಥೆಗಳಿಗೆ ನೀಡಲು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–2–24 ಬಿಟಿ ಪಾಲಿಸಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ: 3–6–2010 ಮತ್ತು ದಿನಾಂಕ : 4–12–2010ರಲ್ಲಿನ ಷರತ್ತುಗಳನ್ನು ಶೈಕ್ಷಣಿಕ ಸಂಸ್ಥೆಗಳು ಅನುಸರಣೆ ಮಾಡಿದ ನಂತರ ಕೆಬಿಟ್ಸ್ ಸಂಸ್ಥೆಯು ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.
2. ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.
3. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾದೃಢೀಕರಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಇ. ರಾಮಕೃಷ್ಣಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬಿ.ಟಿ. ಫಿನಿಷಿಂಗ್ ಸ್ಕೂಲ್ ಸ್ಥಾಪನೆಗಾಗಿ 2ನೇ ಮತ್ತು ಅಂತಿಮ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 58 ಎಂಡಿಎ 2008, ದಿನಾಂಕ : 29–7–2011.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 3–6–2010 ಮತ್ತು 4–12–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ : 19–2–2011 ಮತ್ತು ಮಾತಂಇ 18 ಎಂಡಿಎ 2011 (ಭಾ), ದಿನಾಂಕ : 3–5–2011.
4. ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಇಒ–ಬಿಟಿ/ ಬಿಟಿಎಫ್‌ಎಸ್/46/2011–12, ದಿನಾಂಕ : 22–10–2011.

**ಪ್ರಸ್ತಾವನೆ :**

ಸಹಸ್ರಮಾನದ ಜೈವಿಕ ನೀತಿ–2 ರಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೂಕ್ತ ಪಠ್ಯದೊಂದಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿ, ವಿಶೇಷವಾಗಿ ಪದವೀದರರು ಮತ್ತು ಸ್ನಾತಕೋತ್ತರ ಪದವೀದರರು ನೌಕರಿಗೆ ಯೋಗ್ಯವಾದ ಕೌಶಲ್ಯವನ್ನು ಒಳಗೊಂಡ ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಯನ್ನು ರಾಜ್ಯದಲ್ಲಿ ಘೋಷಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 3–6–2010 ಮತ್ತು ದಿನಾಂಕ : 4–12–2010 ರಂದು ಸರ್ಕಾರವು 12 ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಗಾಗಿ ಅನುಮೋದನೆ ನೀಡಲಾಗಿದೆ.

ಈ ನೀತಿಯಂತೆ ರಾಜ್ಯವು ತನ್ನ ಸಹಕಾರವನ್ನು ಒಂದು ಸಂಸ್ಥೆಗೆ ಗರಿಷ್ಠ ರೂ. 1.00 ಕೋಟಿಯಂತೆ 25% ರಷ್ಟು ಮೊತ್ತಕ್ಕೆ ಮಿತಿಗೊಳಿಸಿದೆ. ಹಾಗೂ ಉಳಿದ 75% ರಷ್ಟು ಮೊತ್ತವನ್ನು ಸಂಸ್ಥೆಯು ಭರಿಸಬೇಕಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 19–2–2011 ರಲ್ಲಿ ರೂ. 275.00 ಲಕ್ಷಗಳನ್ನು ಮತ್ತು ಮಾತಂಇ 18 ಎಂಡಿಎ 2011(ಭಾ), ದಿನಾಂಕ : 3–5–2011 ರೂ. 325.00 ಲಕ್ಷಗಳನ್ನು ಸರ್ಕಾರವು ಒಟ್ಟು ರು. 6.00 ಕೋಟಿಯ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಿ ಕೆಬಿಟ್ಸ್ ಸಂಸ್ಥೆಯ ಮೂಲಕ 50% ರಷ್ಟು ಸಹಕಾರವನ್ನು 12 ಸಂಸ್ಥೆಗಳಿಗೆ ನೀಡಿದೆ.

ಮೇಲೆ (4)ರಲ್ಲಿ ಓದಲಾದ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ದಿನಾಂಕ : 22–10–2011ರಲ್ಲಿ The Oxford college of Science, Bangalore ಮತ್ತು PES Institute of Technology, Bangalore ಈ ಎರಡು ಸಂಸ್ಥೆಗಳು ಉಪಯೋಗಿತಾ ಪತ್ರವನ್ನು ಸಲ್ಲಿಸಿದ್ದು, ಆದ್ದರಿಂದ ಎರಡನೇ ಮತ್ತು ಅಂತಿಮ ಕಂತಾದ ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ.ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಈ ಎರಡು ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 18 ಎಂಡಿಎ 2011, ಬೆಂಗಳೂರು, ದಿನಾಂಕ : 22–10–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ. ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಯ ಮೂಲಕ The Oxford college of Science, Bangalore ಮತ್ತು PES Institute of Technology, Bangalore ಸಂಸ್ಥೆಗಳಿಗೆ ನೀಡಲು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–2–24 ಬಿಟ ಪಾಲಿಸಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ: 3–6–2010 ಮತ್ತು ದಿನಾಂಕ : 4–12–2010ರಲ್ಲಿನ ಷರತ್ತುಗಳನ್ನು ಶೈಕ್ಷಣಿಕ ಸಂಸ್ಥೆಗಳು ಅನುಸರಣೆ ಮಾಡಿದ ನಂತರ ಕೆಬಿಟ್ಸ್ ಸಂಸ್ಥೆಯು ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.
2. ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.
3. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ : 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ರಾಮಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬಿ.ಟಿ. ಫಿನಿಷಿಂಗ್ ಸ್ಕೂಲ್ ಸ್ಥಾಪನೆಗಾಗಿ 2ನೇ ಮತ್ತು ಅಂತಿಮ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 58 ಎಂಡಿಎ 2008, ದಿನಾಂಕ : 29–7–2011.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 3–6–2010 ಮತ್ತು 4–12–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ : 19–2–2011 ಮತ್ತು ಮಾತಂಇ 18 ಎಂಡಿಎ 2011 (ಭಾ), ದಿನಾಂಕ : 3–5–2011.
4. ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಇಒ–ಬಿಟಿ/ಬಿಟಿಎಫ್‌ಎಸ್/48/2011–12, ದಿನಾಂಕ : 26–10–2011.

**ಪ್ರಸ್ತಾವನೆ :**

ಸಹಸ್ರಮಾನದ ಜೈವಿಕ ನೀತಿ–2 ರಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೂಕ್ತ ಪಠ್ಯದೊಂದಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿ, ವಿಶೇಷವಾಗಿ ಪದವೀದರರು ಮತ್ತು ಸ್ನಾತಕೋತ್ತರ ಪದವೀದರರು ನೌಕರಿಗೆ ಯೋಗ್ಯವಾದ ಕೌಶಲ್ಯವನ್ನು ಒಳಗೊಂಡ ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಯನ್ನು ರಾಜ್ಯದಲ್ಲಿ ಘೋಷಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 3–6–2010 ಮತ್ತು ದಿನಾಂಕ : 4–12–2010 ರಂದು ಸರ್ಕಾರವು 12 ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಗಾಗಿ ಅನುಮೋದನೆ ನೀಡಲಾಗಿದೆ.

ಈ ನೀತಿಯಂತೆ ರಾಜ್ಯವು ತನ್ನ ಸಹಕಾರವನ್ನು ಒಂದು ಸಂಸ್ಥೆಗೆ ಗರಿಷ್ಟ ರೂ. 1.00 ಕೋಟಿಯಂತೆ 25% ರಷ್ಟು ಮೊತ್ತಕ್ಕೆ ಮಿತಿಗೊಳಿಸಿದೆ. ಹಾಗೂ ಉಳಿದ 75% ರಷ್ಟು ಮೊತ್ತವನ್ನು ಸಂಸ್ಥೆಯು ಭರಿಸಬೇಕಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 19–2–2011 ರಲ್ಲಿ ರೂ. 275.00 ಲಕ್ಷಗಳನ್ನು ಮತ್ತು ಮಾತಂಇ 18 ಎಂಡಿಇ 2011(ಭಾ), ದಿನಾಂಕ : 3–5–2011 ರೂ. 325.00 ಲಕ್ಷಗಳನ್ನು ಸರ್ಕಾರವು ಒಟ್ಟು ರು. 6.00 ಕೋಟಿಯ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಿ ಕೆಬಿಟ್ಸ್ ಸಂಸ್ಥೆಯ ಮೂಲಕ 50% ರಷ್ಟು ಸಹಕಾರವನ್ನು 12 ಸಂಸ್ಥೆಗಳಿಗೆ ನೀಡಿದೆ.

ಮೇಲೆ (4)ರಲ್ಲಿ ಓದಲಾದ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ದಿನಾಂಕ : 26–10–2011ರಲ್ಲಿ JSS College of Arts, Commerce abnd Science, Mysore ಮತ್ತು Vishweshwaraiah College of Applied Science, Gulbarga ಈ ಎರಡು ಸಂಸ್ಥೆಗಳು ಉಪಯೋಗಿತಾ ಪತ್ರವನ್ನು ಸಲ್ಲಿಸಿದ್ದು, ಆದ್ದರಿಂದ ಎರಡನೇ ಮತ್ತು ಅಂತಿಮ ಕಂತಾದ ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ.ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಈ ಎರಡು ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 18 ಎಂಡಿಎ 2011, ಬೆಂಗಳೂರು, ದಿನಾಂಕ : 26–10–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ. ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಯ ಮೂಲಕ JSS College of Arts, Commerce abnd Science, Mysore ಮತ್ತು Vishweshwariah College of Applied Science, Gulbarga ಸಂಸ್ಥೆಗಳಿಗೆ ನೀಡಲು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–2–24 ಬಿಟಿ ಪಾಲಿಸಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ: 3–6–2010 ಮತ್ತು ದಿನಾಂಕ : 4–12–2010ರಲ್ಲಿನ ಷರತ್ತುಗಳನ್ನು ಶೈಕ್ಷಣಿಕ ಸಂಸ್ಥೆಗಳು ಅನುಸರಣೆ ಮಾಡಿದ ನಂತರ ಕೆಬಿಟ್ಸ್ ಸಂಸ್ಥೆಯು ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.
2. ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.
3. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ : 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ರಾಮಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ

ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬಿ.ಟಿ. ಫಿನಿಷಿಂಗ್ ಸ್ಕೂಲ್ ಸ್ಥಾಪನೆಗಾಗಿ 2ನೇ ಮತ್ತು ಅಂತಿಮ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 58 ಎಂಡಿಇ 2008, ದಿನಾಂಕ : 29–7–2011.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 3–6–2010 ಮತ್ತು 4–12–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಇ 2010(ಭಾ), ದಿನಾಂಕ : 19–2–2011 ಮತ್ತು ಮಾತಂಇ 18 ಎಂಡಿಎ 2011 (ಭಾ), ದಿನಾಂಕ : 3–5–2011.
4. ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ಸಂಖ್ಯೆ : ಕೆಬಿಟ್ಸ್/ಇಒ–ಬಿಟಿ/ಬಿಟಿಎಫ್‌ಎಸ್/49/2011–12, ದಿನಾಂಕ : 28–10–2011.

**ಪ್ರಸ್ತಾವನೆ :**

ಸಹಸ್ರಮಾನದ ಜೈವಿಕ ನೀತಿ–2 ರಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೂಕ್ತ ಪಠ್ಯದೊಂದಿಗೆ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಿ, ವಿಶೇಷವಾಗಿ ಪದವೀದರರು ಮತ್ತು ಸ್ನಾತಕೋತ್ರರ ಪದವೀದರರು ನೌಕರಿಗೆ ಯೋಗ್ಯವಾದ ಕೌಶಲ್ಯವನ್ನು ಒಳಗೊಂಡ ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಯನ್ನು ರಾಜ್ಯದಲ್ಲಿ ಘೋಷಿಸಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 3–6–2010 ಮತ್ತು ದಿನಾಂಕ: 4–12–2010 ರಂದು ಸರ್ಕಾರವು 12 ಬಿಟಿ ಫಿನಿಷಿಂಗ್ ಸ್ಕೂಲ್‌ನ ಸ್ಥಾಪನೆಗಾಗಿ ಅನುಮೋದನೆ ನೀಡಲಾಗಿದೆ.

ಈ ನೀತಿಯಂತೆ ರಾಜ್ಯವು ತನ್ನ ಸಹಕಾರವನ್ನು ಒಂದು ಸಂಸ್ಥೆಗೆ ಗರಿಷ್ಠ ರೂ. 1.00 ಕೋಟಿಯಂತೆ 25% ರಷ್ಟು ಮೊತ್ತಕ್ಕೆ ಮಿತಿಗೊಳಿಸಿದೆ. ಹಾಗೂ ಉಳಿದ 75% ರಷ್ಟು ಮೊತ್ತವನ್ನು ಸಂಸ್ಥೆಯು ಭರಿಸಬೇಕಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010 (ಭಾ), ದಿನಾಂಕ : 19–2–2011 ರಲ್ಲಿ ರೂ. 275.00 ಲಕ್ಷಗಳನ್ನು ಮತ್ತು ಮಾತಂಇ 18 ಎಂಡಿಎ 2011(ಭಾ), ದಿನಾಂಕ : 3–5–2011 ರೂ. 325.00 ಲಕ್ಷಗಳನ್ನು ಸರ್ಕಾರವು ಒಟ್ಟು ರು. 6.00 ಕೋಟಿಯ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಿ ಕೆಬಿಟ್ಸ್ ಸಂಸ್ಥೆಯ ಮೂಲಕ 50% ರಷ್ಟು ಸಹಕಾರವನ್ನು 12 ಸಂಸ್ಥೆಗಳಿಗೆ ನೀಡಿದೆ.

ಮೇಲೆ (4)ರಲ್ಲಿ ಓದಲಾದ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರ ಪತ್ರ ದಿನಾಂಕ : 28–10–2011ರಲ್ಲಿ Manipal Life Sciences Centre, Manipal ಮತ್ತು Padmashree Institute of Management and Sciences, Bangalore ಈ ಎರಡು ಸಂಸ್ಥೆಗಳು ಉಪಯೋಗಿತಾ ಪತ್ರವನ್ನು ಸಲ್ಲಿಸಿದ್ದು, ಆದ್ದರಿಂದ ಎರಡನೇ ಮತ್ತು ಅಂತಿಮ ಕಂತಾದ ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ.ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಈ ಎರಡು ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 18 ಎಂಡಿಎ 2011, ಬೆಂಗಳೂರು, ದಿನಾಂಕ : 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ರೂ. 50.00 ಲಕ್ಷಗಳಂತೆ ಪ್ರತಿ ಬಿಟಿ. ಫಿನಿಷಿಂಗ್ ಸ್ಕೂಲ್‌ಗೆ ಒಟ್ಟು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಯ ಮೂಲಕ Manipal Life Sciences Centre, Manipal ಮತ್ತು Padmashree Institute of Management and Sciences, Bangalore ಸಂಸ್ಥೆಗಳಿಗೆ ನೀಡಲು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–2–24 ಬಿಟಿ ಪಾಲಿಸಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 01 ಎಂಡಿಎ 2010(ಭಾ), ದಿನಾಂಕ: 3–6–2010 ಮತ್ತು ದಿನಾಂಕ : 4–12–2010ರಲ್ಲಿನ ಷರತ್ತುಗಳನ್ನು ಶೈಕ್ಷಣಿಕ ಸಂಸ್ಥೆಗಳು ಅನುಸರಣೆ ಮಾಡಿದ ನಂತರ ಕೆಬಿಟ್ಸ್ ಸಂಸ್ಥೆಯು ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.
2. ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.
3. ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಇ. ರಾಮಕೃಷ್ಣಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗು ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2718

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ಮಹಾನಗರಪಾಲಿಕೆ – ಮುಖ್ಯ ಮಂತ್ರಿಗಳ ನಗರೋತ್ಥಾನ ಯೋಜನೆ ಅಡಿ ರೂ. 100 ಕೋಟಿ ವಿಶೇಷ ಅನುದಾನದಲ್ಲಿ 2ನೇ ಹಂತದ ಕ್ರಿಯ ಯೋಜನೆಯ ಪಟ್ಟಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ : 13–08–2010.
2. ಸರ್ಕಾರದ ಸುತ್ತೋಲೆ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ: 24–08–2010.
3. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಸಂಖ್ಯೆ ಇವರ ಪತ್ರ ಸಂಖ್ಯೆ : ಪೌನಿ/ತಾಂತ್ರಿಕ/ಮೈಸೂರು/116 (ಭಾಗ–6)/2009–10 ದಿನಾಂಕ : 19–08–2011.
4. ಸರ್ಕಾರದ ಅಧಿಸೂಚನೆ ಶಂಖ್ಯೆ : ಸಿಆಸುಇ 20 ಇಜಿವಿ 2009 (4), ದಿನಾಂಕ 13–07–2009.
5. ಸರ್ಕಾರದ ಆದೇಶ ಸಂಖ್ಯೆ : ನಅಇ 108 ಎಸಿಎಂ 2010, ದಿನಾಂಕ : 13–08–2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 13–08–2010 ರ ಸರ್ಕಾರದ ಆದೇಶದಲ್ಲಿ ಮೈಸೂರು ಮಹಾನಗರಪಾಲಿಕೆ ಸೇರಿದಂತೆ ರಾಜ್ಯದ 7 ಮಹಾನಗರಪಾಲಿಕೆಗಳಲ್ಲಿ ಮುಖ್ಯ ಮಂತ್ರಿಗಳ ನಗರೋತ್ಥಾನ ;ಯೋಜನೆ ಅಡಿ ರೂ. 100 ಕೋಟಿ ವಿಶೇಷ ಅನುದಾನದಲ್ಲಿ 2ನೇ ಹಂತದಲ್ಲಿ ಅಭಿವೃದ್ಧಿ

ಕಾಮಗಾರಿಗಳನ್ನು ತೆಗೆದುಕೊಳ್ಳಲು 2011–12 ರಿಂದ 2013–14 ರ ಆರ್ಥಿಕ ವರ್ಷಗಳಲ್ಲಿ ಪ್ರತಿ ಮಹಾನಗರಪಾಲಿಕೆಗೆ ತಲಾ ರೂ. 100 ಕೋಟಿಯಂತೆ ಒಟ್ಟಾರೆ ರೂ. 700 ಕೋಟಿ ಅನುದಾನ ಮಂಜೂರು ಮಾಡಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ : 24–08–2010 ರ ಸರ್ಕಾರದ ಸುತ್ತೋಲೆಯಲ್ಲಿ ರಾಜ್ಯ 7 ಮಹಾನಗರಪಾಲಿಕೆಗಳಲ್ಲಿ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿರುವ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆ ಮಾಡುವುದಕ್ಕೆ ಮತ್ತು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಮಾರ್ಗದರ್ಶಿ ಸೂತ್ರಗಳನ್ನು ನೀಡಲಾಗಿದೆ.

3. ಮೇಲೆ (3) ರಲ್ಲಿ ಓದಲಾದ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ದಿನಾಂಕ : 19–08–2011 ರ ಪತ್ರದಲ್ಲಿ ಮೈಸೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ರೂ. 100 ಕೋಟಿ ವಿಶೇಷ ಅನುದಾನ ಯೋಜನೆಯ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಅಭಿವೃದ್ಧಿ ಕಾಮಗಾರಿಗಳ ಕ್ರಿಯಾಯೋಜನೆ ಪಟ್ಟಿಗೆ ಅನುಮೋದನೆ ನೀಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಈಗ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಅನುದಾನ ಹಂಚಿಕೆಯನ್ನು ಮಾರ್ಗಸೂಚಿಗಳಿಗೆ ಹೋಲಿಸಿದಾಗ ಅದು ಕೆಳಕಂಡಂತೆ ಇರುತ್ತದೆಂದು ವರದಿ ಮಾಡಲಾಗಿದೆ :

(ಮೊತ್ತ ಲಕ್ಷ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿಗಳ ಸ್ವರೂಪ | 24–08–2010ರ ಸುತ್ತೋಲೆಯಂತೆ ನಿಗದಿಪಡಿಸಿರುವ ಕನಿಷ್ಠ/ಗರಿಷ್ಠ ಮಿತಿ | ಮೈಸೂರು ಮಹಾನಗರ ಪಾಲಿಕೆ ಪ್ರಸ್ತಾವನೆ | ವ್ಯತ್ಯಾಸ |
|---|---|---|---|---|
| 1 | ರಸ್ತೆಗಳು, ರಸ್ತೆ ಬದಿ ಚರಂಡಿಗಳ ಅಭಿವೃದ್ಧಿ, ಪಾದಚಾರಿ ಮಾರ್ಗ ಮತ್ತು ಪಾದಾಚಾರಿ ಸುರಂಗ ಮಾರ್ಗಗಳು | 3500 | 3500.00 | 0.00 |
| 2 | ನೀರು ಸರಬರಾಜು ವಿತರಣಾ ಜಾಲದ ನವೀಕರಣ/ವೃದ್ಧಿ, ಮೇಲ್ಮಟ್ಟದ ಜಲಸಂಗ್ರಹಾಗಾರ ಮತ್ತು ನೆಲಮಟ್ಟದ ಜಲಸಂಗ್ರಹಾಗಾರ ನಿರ್ಮಾಣ ಹಾಗೂ ಇತರೆ ನೀರು ಸರಬರಾಜು ಕಾಮಗಾರಿಗಳು | 2000 | 2094.20 | +94.20 |
| 3 | ಒಳಚರಂಡಿವ್ಯವಸ್ಥೆ ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು ಹಾಗೂ ಇತರೆ ಯುಜಿಡಿ ಕಾಮಗಾರಿ | 1000 | 1150.00 | +150.00 |
| 4 | ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು (Traffic management improvement works such as VEHICLE ACTUATED SIGNAL (Solar/UPS) Integrated with surveillance enforcement cameras) | 500 | 150.00 | –350.00 |
| 5 | ಘನತ್ಯಾಜ್ಯ ವಸ್ತು ನಿರ್ವಹಣೆ ಸಂಬಂಧಿತ ಲ್ಯಾಂಡ್ ಫಿಲ್ ಸೈಟ್ ಅಭಿವೃದ್ಧಿ ಕಾಮಗಾರಿಗಳು, ನಗರ ಸ್ವಚ್ಚತೆ ನಿರ್ವಹಣೆ ಸಂಬಂಧಿತ ಯಂತ್ರೋಪಕರಣಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಲು ಮತ್ತು ಇತರೆ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳು | 2000 | 0.00 | –2000.00 |
| 6 | ಉದ್ಯಾನವನಗಳ ನಿರ್ಮಾಣ/ಅಭಿವೃದ್ಧಿ ಮತ್ತು ನಗರ ಅರಣ್ಯೀಕರಣ | 1000 | 500.00 | –500.00 |
| | ಒಟ್ಟು | 8000 | 7394.20 | |

4. ಮೇಲೆ ಕಂಡು ಬರುವ ವ್ಯತ್ಯಾಸಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆಯಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರು ಈ ಕೆಳಕಂಡಂತೆ ಕಾರಣಗಳನ್ನು ನೀಡಿರುತ್ತಾರೆ :

5. ಕ್ರಮ ಸಂಖ್ಯೆ (2) ರಲ್ಲಿನ ನೀರು ಸರಬರಾಜು ವಿತರಣಾ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಮಾರ್ಗದರ್ಶಿ ಸೂತ್ರಗಳಲ್ಲಿ ಗರಿಷ್ಠ ಮಿತಿಯನ್ನು ಅಳವಡಿಸದೇ ಇರುವುದರಿಂದ ರೂ. 2,094.20 ಮೌಲ್ಯದ ಕಾಮಗಾರಿಗಳಿಗೆ ಹೆಚ್ಚುವರಿಯಾಗಿ ಬೇಕಾಗಿರುವ ರೂ. 94.20 ಲಕ್ಷ ಅನುದಾನವನ್ನು ಉದ್ಯಾನವನ ವಲಯದಲ್ಲಿ ಉಂಟಾಗಿರುವ ರೂ. 500 ಲಕ್ಷ ಉಳಿತಾಯದಿಂದ ಹೊಂದಾಣಿಕೆ ಮಾಡಿಕೊಳ್ಳಲು ಅವಕಾಶವಿರುತ್ತದೆ.

6. ಕ್ರಮ ಸಂಖ್ಯೆ (3) ರಲ್ಲಿನ ಒಳಚರಂಡಿ ವ್ಯವಸ್ಥೆಗೆ ಸಂಬಂಧಿಸಿದ ಕಾಮಗಾರಿಗಳಿಗೆ ಮಾರ್ಗದರ್ಶಿ ಸೂತ್ರಗಳಲ್ಲಿ ಗರಿಷ್ಠ ಮಿತಿಯನ್ನು ಅಳವಡಿಸದೇ ಇರುವುದರಿಂದ ರೂ. 1,150 ಮೌಲ್ಯದ ಕಾಮಗಾರಿಗಳಿಗೆ ಹೆಚ್ಚುವರಿಯಾಗಿ ಬೇಕಾಗಿರುವ ರೂ. 150 ಲಕ್ಷ ಅನುದಾನವನ್ನು ಉದ್ಯಾನವನ ವಲಯದಲ್ಲಿ ಉಂಟಾಗಿರುವ ರೂ. 500 ಲಕ್ಷಗಳ ಉಳಿತಾಯದಿಂದ ಹೊಂದಾಣಿಕೆ ಮಾಡಿಕೊಳ್ಳಲು ಅವಕಾಶವಿರುತ್ತದೆ.

7. ಕ್ರಮ ಸಂಖ್ಯೆ (4)ರ ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳಿಗೆ ಮಾರ್ಗದರ್ಶಿ ಸೂಚನೆ ಅನ್ವಯ ರೂ. 500 ಲಕ್ಷ ಕಡ್ಡಾಯವಾಗಿ ಅಳವಡಿಸಬೇಕಾಗಿರುವುದರಿಮದ ಬಾಕಿ ಇರುವ ರೂ. 350 ಲಕ್ಷ ಮೌಲ್ಯದ ಕಾಮಗಾರಿಯನ್ನು ಗುರುತಿಸಿ ಕ್ರಿಯಾ ಯೋಜನೆಯನ್ನು ಸಲ್ಲಿಸಲು ಸೂಚಿಸಬಹುದು.

8. ಕ್ರಮ ಸಂಖ್ಯೆ (6) ರ ಉದ್ಯಾನವನಗಳ ನಿರ್ಮಾಣ ಇತರೆ ಕಾಮಗಾರಿಗಳಿಗೆ ಮಾರ್ಗದರ್ಶಿ ಸೂಚನೆ ಅನ್ವಯ ರೂ. 1,000 ಲಕ್ಷಕ್ಕೆ ಬದಲಾಗಿ ರೂ. 500 ಲಕ್ಷಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದರೆ ಈ ವಲಯದಲ್ಲಿ ಕನಿಷ್ಠ ಮಿತಿಯನ್ನು ಅಳವಡಿಸದೇ ಇರುವುದರಿಂದ ಉಳಿತಾಯವಾಗಿರುವ ರೂ. 500 ಲಕ್ಷ ಅನುದಾನವನ್ನು ಇತರೆ ಕಾಮಗಾರಿಗಳಿಗೆ ಹೊಂದಾಣಿಕೆ ಮಾಡಿಕೊಳ್ಳಲು ಅವಕಾಶವಿರುತ್ತದೆ.

9. ಮುಂದುವರೆದು, ಪ್ರಸ್ತಾವನೆಯಲ್ಲಿ ರಸ್ತೆ ವಲಯಕ್ಕೆ ನಿಗಧಿಪಡಿಸಿದ ರೂ. 3,500 ಲಕ್ಷ ಅನುದಾನದಲ್ಲಿ 2010 ರ ದಸರಾ ಸಂದರ್ಭದಲ್ಲಿ ಕೈಗೊಂಡಿರುವ 33 ರಸ್ತೆ ಅಭಿವೃದ್ಧಿ ಕಾಮಗಾರಿಗಳು, 2011 ರ ದಸರಾ ಪ್ರಯುಕ್ತ ಕೈಗೊಂಡಿರುವ 55 ರಸ್ತೆ ಅಭಿವೃದ್ಧಿ ಕಾಮಗಾರಿಗಳು ಮತ್ತು ಇತರೆ 12 ರಸ್ತೆ ಹಾಗೂ ಸೇತುವೆ ನಿರ್ಮಾಣ ಕಾಮಗಾರಿಗಳನ್ನು ಸೇರಿಸಲಾಗಿದ್ದು, ಅದನ್ನು ಪರಿಗಣಿಸುವಂತೆ ಕೋರಲಾಗಿದೆ.

10. ಉಳಿದಂತೆ ಘನತ್ಯಾಜ್ಯ ನಿರ್ವಹಣೆ ಸಂಬಂಧಿತ ಕಾಮಗಾರಿಗಳಿಗೆ ಪ್ರತ್ಯೇಕವಾಗಿ ಪ್ರಸ್ತಾವನೆ ಸಲ್ಲಿಸಲಾಗುವುದೆಂದು ಪ್ರಸಾವನೆಯಲ್ಲಿ ತಿಳಿಸಲಾಗಿದ್ದು, ಮೇಲಿನಂತೆ 2ನೇ ಹಂತದಲ್ಲಿ ಕೈಗೊಳ್ಳಬಹುದಾದ ರೂ. 100 ಕೋಟಿ ಮೌಲ್ಯದ ಪೈಕಿ ಈಗ ರೂ. 7394.20 ಲಕ್ಷ ಮೊತ್ತಕ್ಕೆ ಕ್ರಿಯಾ ಯೋಜನೆ ಸಲ್ಲಿಸಿ ಅನುಮೋದನೆ ನೀಡಲು ಪ್ರಸ್ತಾವನೆಯಲ್ಲಿ ಕೋರಲಾಗಿದೆ.

11. ಈ ಸಂಬಂಧ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಅಧ್ಯಕ್ಷರು, ಮಾನ್ಯ ವಿಶೇಷ ಅನುದಾನದ ಸಮಿತಿ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 21–7–2011 ರಂದು ನಡೆದ ಸಭೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದಲ್ಲಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ರೂ. 100 ಕೋಟಿ ಮೊತ್ತದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಅಂತಿಮಗೊಳಿಸಲಾಗಿದೆ.

12. ಮೇಲೆ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಕಾಮಗಾರಿಗಳ ಗರಿಷ್ಠ/ಕನಿಷ್ಠ ಮಿತಿಯಲ್ಲಿನ ವ್ಯತ್ಯಾಸಕ್ಕೆ ವಿಶೇಷ ಪ್ರಕರಣವೆಂದು ಪರಿಗಣಿಸಿ ವಿಶೇಷ ಅನುದಾನದ ಸಮಿತಿಯ ಶಿಫಾರಸ್ಸಿನಂತೆ ಮೇಲೆ (2) ರಲ್ಲಿ ಓದಲಾದ ಸರ್ಕಾರದ ದಿನಾಂಕ 24–08–2010 ರ ಸುತ್ತೋಲೆಯಲ್ಲಿನ ಮಾರ್ಗದರ್ಶಿ ಸೂತ್ರಗಳಿಂದ ವಿನಾಯತಿ ನೀಡಲು ಉದ್ದೇಶಿಸಿದೆ.

13. ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮೈಸೂರು ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ ಮಹಾನಗರಪಾಲಿಕೆಗಳಲ್ಲಿ ರೂಪಾಯಿ ಹತ್ತು ಲಕ್ಷಕ್ಕೂ ಮೀರಿದ ಎಲ್ಲಾ ರೀತಿಯ ಸಾರ್ವಜನಿಕ ಸಂಗ್ರಹಣೆಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪ್ಲಾಟ್ ಫಾರಂ ಮುಖಾಂತರ ಕೈಗೊಳ್ಳುವಂತೆ ಆದೇಶಿಸಲಾಗಿದೆ.

14. ಮೇಲೆ (5)ರಲ್ಲಿ ಓದಲಾದ ದಿನಾಂಕ 13–08–2010 ರ ಆದೇಶದಲ್ಲಿ ರೂ. 500 ಲಕ್ಷ ಅನುದಾನವನ್ನು ಮೈಸೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ನಗರೋತ್ಥಾನ ಯೋಜನೆಯ 2ನೇ ಹಂತದ ಅಡಿ ಕೈಗೊಳ್ಳಲಾಗುವ ಮೂಲಭೂತ ಸೌಕರ್ಯ (ರಸ್ತೆಗಳು, ಚರಂಡಿಗಳು, ಉದ್ಯಾನವನಗಳು, ಬೀದಿ ದೀಪಗಳ ದುರಸ್ಥಿ ಮತ್ತು ಅಭಿವೃದ್ಧಿ) ಕಾಮಗಾರಿಗಳಿಗಾಗಿ ಬಿಡುಗಡೆ ಮಾಡಲಾಗಿದೆ.

15. ಅದರಂತೆ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 178 ಎಸಿಎಂ 2011, ಬೆಂಗಳೂರು, ದಿನಾಂಕ: 24 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಈ ಕೆಳಕಂಡ ರೂಪಯಿ ಎಪ್ಪತ್ತಮೂರು ಕೋಟಿ ತೊಂಭತ್ತನಾಲ್ಕು ಲಕ್ಷದ ಇಪ್ಪತ್ತು ಸಾವಿರ ಮೌಲ್ಯದ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

(ಮೊತ್ತ ಲಕ್ಷ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿಗಳ ವಿವರ | ಅಂದಾಜು ಮೊಬಲಗು |
|---|---|---|
| | **ರಸ್ತೆಗಳು, ರಸ್ತೆ ಬದಿ ಚರಂಡಿಗಳ ಅಭಿವೃದ್ಧಿ ಪಾದಚಾರಿ ಮಾರ್ಗ ಮತ್ತು ಪಾದಚಾರಿ ಸುರಂಗ ಮಾರ್ಗಗಳು** | |
| 1 | ಚಾಮರಾಜ ಜೋಡಿ ರಸ್ತೆಯನ್ನು ಅಂತರರಾಷ್ಟ್ರೀಯ ಮಟ್ಟದ ಗುಣಮಟ್ಟ ಹಾಗು ಎಲ್ಲಾ ರಸ್ತೆಯ ಪೀಠೋಪಕರಣಗಳನ್ನು ಅಭಿವೃದ್ಧಿಪಡಿಸುವುದು. | 1000.00 |
| 2 | ಮಿರ್ಜಾ ರಸ್ತೆಯಲ್ಲಿ ಬಿದ್ದು ಹೋಗಿರುವ ದೊಡ್ಡ ಸೇತುವೆಯ ಪುನರ್ ನಿರ್ಮಾಣ | 150.00 |
| 3 | ಹೈವೇ ಹೋಟೆಲ್ ಸರ್ಕಲ್‌ನಿಂದ ಜೋಡಿ ತೆಂಗಿನಮರ ಸ್ಮಶಾನದ ಮುಂದಿನ ರಸ್ತೆಯ ಅಭಿವೃದ್ಧಿ | 280.00 |
| 4 | ಹೈವೇ ಸರ್ಕಲ್‌ನಿಂದ ಜಾವಾ ಫ್ಯಾಕ್ಟರಿ ಮಾರ್ಗವಾಗಿ ಹೊಗುವ ರಸ್ತೆ ಅಭಿವೃದ್ಧಿ | 250.00 |
| 5 | ರಾಮಾನುಜ ರಸ್ತೆ ಅಭಿವೃದ್ಧಿ | 350.00 |
| 6 | ಸಯ್ಯಾಜಿರಾವ್ ರಸ್ತೆಯ ಬಾಟ ಷೋರೂಂನಿಂದ ಧನ್ವಂತ್ರಿ ರಸ್ತೆ ಅಭಿವೃದ್ಧಿ | 100.00 |
| 7 | ದೇವರಾಜು ಅರಸು ರಸ್ತೆಗೆ ಮರುಡಾಂಬರೀಕರಣ | 43.60 |
| 8 | ಸಯ್ಯಾಜಿರಾವ್ ರಸ್ತೆಗೆ ಮರುಡಾಂಬರೀಕರಣ ಮಾಡುವುದು | 71.76 |
| 9 | ಅನಿಕೇತನ ರಸ್ತೆ ಅಭಿವೃದ್ಧಿಪಡಿಸುವುದು (ಕಾವೇರಿ ಶಾಲೆಯ ಮಳೆ ನೀರು ಚರಂಡಿಯಿಂದ ವಿಶ್ವಮಾನವ ಜೋಡಿ ರಸ್ತೆಯ ಎ ಇಂದ ಜೆಡ್‌ವರೆಗೆ) | 75.00 |
| 10 | ಪಡುವಣ ರಸ್ತೆ ಮತ್ತು ಅನಿಕೇತನ ರಸ್ತೆಯನ್ನು ಅಭಿವೃದ್ಧಿಪಡಿಸುವುದು. (ಪಡುವನ ರಸ್ತೆಯಿಂದ ವಿಶ್ವಮಾನವ ಜೋಡಿ ರಸ್ತೆಯವೆಗೆ) | 50.00 |
| 11 | ವಿದ್ಯಾರಣ್ಯಪುರಂನ 16ನೇ ಅಡ್ಡರಸ್ತೆಯಿಂದ (ಲಿಂಗಾಯಿತರ ಸ್ಮಶಾನ ರಸ್ತೆ) ಎಕ್ಸಲ್ ಪ್ಲಾಂಟ್ ರಸ್ತೆಯವರೆಗೆ ರಸ್ತೆ ಅಭಿವೃದ್ಧಿ ಹಾಗೂ ಚರಂಡಿ ಅಭಿವೃದ್ಧಿ | 40.00 |
| 12 | ವಿದ್ಯಾರಣ್ಯಪುರಂ ನಾಲ್ಕನೇ ಮುಖ್ಯ ರಸ್ತೆ, 16ನೇ ಅಡ್ಡರಸ್ತೆಯ ಅಕ್ಕಮಹಾದೇವಿ ರಸ್ತೆಯಿಂದ ರೋಲಾನ್ ಚೈನ್ ಫ್ಯಾಕ್ಟರಿವರೆಗೆ ರಸ್ತೆ ಅಭಿವೃದ್ಧಿ. | 37.00 |
| | ದಿನಾಂಕ 12–08–2010 ರಮದು ಮಾನ್ಯ ಮುಖ್ಯ ಮಂತ್ರಿಗಳು ದಸರಾ ಉನ್ನತ ಮಟ್ಟದ ಸಭೆಯಲ್ಲಿ ಕೈಗೊಳ್ಳಲು ಸೂಚಿಸಿರುವಂತೆ ಹಾಗೂ ಸರ್ಕಾರದ ಆದೇಶ ಸಂಖ್ಯೆ : ನಅಇ 108 ಎಸಿಎಂ 2010, ದಿನಾಂಕ 13–08–2010 ರ ಆದೇಶದನ್ವಯ ಬಿಡುಗಡೆಯಾದ ಅನುದಾನದಲ್ಲಿ ಕೈಗೊಂಡಿರುವ ದಸರಾ ಕಾಮಗಾರಿಗಳು (ರಸ್ತೆಗಳು ಮತ್ತು ಪಾದಚಾರಿ ರಸ್ತೆ ಅಭಿವೃದ್ಧಿಪಡಿಸುವುದು) | |

| | | |
|---|---|---|
| 13 | ಚಾಮುಂಡಿಪುರಂ 1ನೇ ಮುಖ್ಯರಸ್ತೆಗೆ ಮರು ಡಾಂಬರೀಕರಣ | 9.90 |
| 14 | ಚಾಮರಾಜ ವೃತ್ತದಿಂದ ಅಶೋಕ ರಸ್ತೆಯ ಆಯ್ದ ಭಾಗಗಳಿಗೆ ಮತ್ತು ಆಲ್ಬರ್ಟ್ ವಿಕ್ಟರ್ ರಸ್ತೆಯ ಆಯ್ದ ಭಾಗಗಳಿಗೆ ಮರು ಡಾಂಬರೀಕರಣ | 9.00 |
| 15 | ಸಯ್ಯಾಜಿರಾವ್ ರಸ್ತೆಯಿಂದ ಅಶೋಕ ರಸ್ತೆಯವರೆಗಿನ ಕೆ. ಆರ್. ಆಸ್ಪತ್ರೆ ರಸ್ತೆಗೆ ರಸ್ತೆ ಅಭಿವೃದ್ಧಿ ಮತ್ತು ಮರು ಡಾಂಬರೀಕರಣ | 8.00 |
| 16 | ಗಾಂಧಿವೃತ್ತದಿಂದ ಓಲ್ಡ್ ಬ್ಯಾಂಕ್ ರಸ್ತೆಗೆ ಮತ್ತು ಕ್ರಾಸ್ ರಸ್ತೆಗಳಿಗೆ ಮರು ಡಾಂಬರೀಕರಣ ಮಾಡುವುದು | 9.90 |
| 17 | ಜಗನ್ಮೋಹನ ಪ್ಯಾಲೇಸ್ ರಸ್ತೆಗೆ ಸಯ್ಯಾಜಿರಾವ್ ರಸ್ತೆ ಸಂಧಿಸುವವರೆಗೆ ಮರು ಡಾಂಬರೀಕರಣ ಮಾಡುವುದು | 9.00 |
| 18 | ಸರ್ಕಾರಿ ಅತಿಥಿ ಗೃಹದಿಂದ ಫೈಲೇಟ್ ಸರ್ಕಲ್‌ವರೆಗೆ ಚರಂಡಿ ಚರು ನಿರ್ಮಾಣ & ಪಾದಚಾರಿ ರಸ್ತೆ ಅಭಿವೃದ್ಧಿ (ಎಡ ಭಾಗ) | 9.90 |
| 19 | ಸರ್ಕಾರಿ ಅತಿಥಿಗೃಹದ ಹಿಂಭಾಗದ ರಸ್ತೆಯಲ್ಲಿ ಸಂಭ್ರಮ ವೃತ್ತದವರೆಗೆ ಚರಂಡಿ ಮರು ನಿರ್ಮಾಣ ಮತು ಪಾದಚಾರಿ ರಸ್ತೆ ಅಭಿವೃದ್ಧಿ | 5.00 |
| 20 | ಸಂಭ್ರಮ ವೃತ್ತದಿಂದ ಹಾರ್ಡಿಂಜ್ ವೃತ್ತದವರೆಗಿನ ಸರ್ಕಾರಿ ಅತಿಥಿಗೃಹ ರಸ್ತೆಯಲ್ಲಿ ಚರಂಡಿ ಮರು ನಿರ್ಮಾಣ ಮತ್ತು ಪಾದಚಾರಿ ರಸ್ತೆ ಅಭಿವೃದ್ಧಿಪಡಿಸುವುದು | 8.00 |
| 21 | ಹಾರ್ಡಿಂಜ್ ವೃತ್ತದಿಂದ ಸಬರ್ಬ್ ಬಸ್ ನಿಲ್ದಾಣದವರೆಗೆ ಪಾದಚಾರಿ ರಸ್ತೆ ಅಭಿವೃದ್ಧಿಪಡಿಸುವುದು ಮತ್ತು ಮರು ಡಾಂಬರೀಕರಣ | 9.90 |
| 22 | ಆರ್ಚ್ ಗೇಟ್‌ನಿಂದ ಸರ್ಕಾರಿ ಅತಿಥಿಗೃಹದ ಹಿಂಭಾಗದ ರಸ್ತೆಗೆ ಮರು ಡಾಂಬರೀಕರಣ ಮಾಡುವುದು | 5.00 |
| 23 | ಸಾಹುಕಾರ್ ಚೆನ್ನಯ್ಯ ವೃತ್ತದಿಂದ ಗೋಪಾಲ್ ಗೌಡ ವೃತ್ತದವರೆಗಿನ ಬಜಾರ್ ರಸ್ತೆಯನ್ನು ಅಭಿವೃದ್ಧಿಪಡಿಸುವುದು ಮತ್ತು ಡಾಂಬರೀಕರಣ | 9.90 |
| 24 | ಚಾಮರಾಜ ಜೋಡಿರಸ್ತೆಯಿಂದ ರಮಾವಿಲಾಸ ರಸ್ತೆಯವರೆಗಿನ ಬನುಮಯ್ಯ ರಸ್ತೆಗೆ ಡಾಂಬರೀಕರಣ | 15.00 |
| 25 | ರಾಮಾನುಜ ರಸ್ತೆಗೆ ಮತ್ತು ಉತ್ತರಾದಿ ಮಠ ರಸ್ತೆಗೆ ಡಾಂಬರೀಕರಣ | 20.00 |
| 26 | ನಾಲಾಬೀದಿ ಮುಖ್ಯರಸ್ತೆಗೆ ಮರು ಡಾಂಬರೀಕರಣ | 15.00 |
| 27 | ಬಸವೇಶ್ವರ ರಸ್ತೆಗೆ ಡಾಂಬರೀಕರಣ ಮಾಡುವುದು | 15.00 |
| 28 | ಬುಲೇವಾರ್ಡ್ ರಸ್ತೆಗೆ ಕಾಂತರಾಜ್ ರಸ್ತೆಯಿಂದ ಕೋರ್ಟ್ ಗೇಟ್ ವರೆಗೆ ಮರು ಡಾಂಬರೀಕರಣ ಮಾಡುವುದು | 25.00 |
| 29 | ಬುಲೇವಾರ್ಡ್ ರಸ್ತೆಗೆ ಕೋರ್ಟ್ ಗೇಟ್‌ನಿಂದ ಏಕಲವ್ಯ ವೃತ್ತದವರೆಗೆ ಮರು ಡಾಂಬರೀಕರಣ ಮಾಡುವುದು | 29.00 |
| 30 | ವಾಲ್ಮೀಕಿ ರಸ್ತೆಗೆ ಮರು ಡಾಂಬರೀಕರಣ ಮಾಡುವುದು. (ಹುಣಸೂರು ರಸ್ತೆಯಿಂದ ಕೆ.ಆರ್.ಎಸ್ ರಸ್ತೆವರೆಗೆ) | 29.00 |
| 31 | ನಿರ್ಮಲ ಕಾನ್ವೆಂಟ್‌ನಿಂದ ಗೋಕುಲಂ 7ನೇ ಮುಖ್ಯರಸ್ತೆವರೆಗೆ ರಸ್ತೆ ಅಭಿವೃದ್ಧಿ ಮತ್ತು ಮರು ಡಾಂಬರೀಕರಣ ಮಾಡುವುದು | 25.00 |
| 32 | ವಿ.ವಿ. ಮೊಹಲ್ಲ ಪೊಲೀಸ್ ಸ್ಟೇಷನ್ ನಿಂದ ಮಾತೃಮಂಡಳಿ ವೃತ್ತದವರೆಗಿನ ಟೆಂಪಲ್ ರಸ್ತೆಗೆ ಮರು ಡಾಂಬರೀಕರಣ | 29.00 |
| 33 | ಚಂದ್ರಗುಪ್ತ ರಸ್ತೆಗೆ ಮರು ಡಾಂಬರೀಕರಣ ಮಾಡುವುದು | 15.00 |
| 34 | ನೆಹರು ವೃತ್ತದಿಂದ ಕೆ.ಟಿ. ಸ್ಟ್ರೀಟ್ ಜಂಕ್ಷನ್‌ವರೆಗಿನ ಇರ್ವಿನ್ ರಸ್ತೆಗೆ ಮತ್ತು ಆಯ್ದ ಭಾಗಗಳಿಗೆ ಮರು ಡಾಂಬರೀಕರಣ | 12.00 |
| 35 | ಜಗನ್ಮೋಹನ ಅರಮನೆ ರಸ್ತೆಯ ಪಾದಚಾರಿ ರಸ್ತೆಯ ಎರಡು ಬದಿಗಳಲ್ಲಿ ಕಲರ್ ಚೆಕ್ಕರ್ಸ್ ಟೈಲ್ಸ್ ಅಳವಡಿಸುವುದು | 15.00 |
| 36 | ಗೀತಾ ಮಂದಿರ ರಸ್ತೆಗೆ ಮರು ಡಾಂಬರೀಕರಣ ಮಾಡುವುದು | 20.00 |
| 37 | ಫೈವ್ ಲೈಟ್ ವೃತ್ತದಿಂದ ಸರ್ಕಾರಿ ಅತಿಥಿಗೃಹ ರಸ್ತೆಯಲ್ಲಿ ಚರಂಡಿ ಮರು ನಿರ್ಮಾಣ ಮತ್ತು ಪಾದಚಾರಿ ರಸ್ತೆ ಅಭಿವೃದ್ಧಿ (ಬಲ ಭಾಗ) | 15.00 |
| 38 | ಮಲೇ ಮಹದೇಶ್ವರ ರಸ್ತೆಗೆ ಬಿ.ಎನ್. ರಸ್ತೆಯಿಂದ ಕೆನರಾ ಬ್ಯಾಂಕ್ ವೃತ್ತದವರೆಗೆ ಚರಂಡಿ ಮರು ನಿರ್ಮಾಣ & ಪಾದಚಾರಿ ರಸ್ತೆ ಅಭಿವೃದ್ಧಿ | 12.00 |
| 39 | ಥಿಯೋಬಾಲ್ಡ್ ರಸ್ತೆಯಲ್ಲಿ ಚರಂಡಿ ಅಭಿವೃದ್ಧಿ, ಪಾದಚಾರಿ ರಸ್ತೆ ಮತ್ತು ಮರು ಡಾಂಬರೀಕರಣ ಆಡುವುದು | 15.00 |
| 40 | ಮಿರ್ಜಾ ರಸ್ತೆಗೆ ಹಾರ್ಡಿಂಜ್ ವೃತ್ತದಿಂದ ಪೊಲೀಸ್ ಕಮೀಷನರ್ ಕಛೇರಿವರೆಗೆ ಚರಂಡಿ, ಪಾದಚಾರಿ ರಸ್ತೆ ಮತ್ತು ಮರು ಡಾಂಬರೀಕರಣ | 25.00 |
| 41 | ಸರ್ಕಾರಿ ಅತಿಥಿಗೃಹದಿಂದ ಎಲ್.ಐ.ಸಿ. ವೃತ್ತದವರೆಗಿನ ರಸ್ತೆಗೆ ಮರು ಡಾಂಬರೀಕರಣ ಮಾಡುವುದು | 15.00 |
| 42 | ಆರ್.ಎಂ.ಸಿ ವೃತದಿಂದ ಹೈವೇ ವೃತ್ತದವರೆಗಿನ ರಸ್ತೆಗೆ ಹಾಳಾಗಿರುವ ಭಾಗಗಳಲ್ಲಿ ಮರು ಡಾಂಬರೀಕರಣ | 15.00 |
| 43 | ಅಶೋಕ ರಸ್ತೆಯಲ್ಲಿ ಫೌಂಟನ್ ವೃತ್ತದಿಂದ ಗುಂಬ್ಬಿವರೆಗೆ ಚರಂಡಿ ಮರು ನಿರ್ಮಾಣ & ಎರಡು ಬದಿಯ ಪಾದಚಾರಿ ರಸ್ತೆ ಅಭಿವೃದ್ಧಿ | 15.00 |
| 44 | ಲೋಕರಂಜನ್ ಮಹಲ್ ರಸ್ತೆಯಲ್ಲಿ ಎಸ್. ಲಿಂಗಣ್ಣ ವೃತ್ತದಿಂದ ಹಾರ್ಡಿಂಜ್ ವೃತ್ತದವರೆಗೆ ರಸ್ತೆಯನ್ನು ಅಭಿವೃದ್ಧಿಪಡಿಸಿ, ಮರು ಡಾಂಬರೀಕರಣ ಮಾಡುವುದು | 20.00 |
| 45 | ಇಟ್ಟಿಗೆಗೂಡು ಶಾಲಿವಾಹನ ರಸ್ತೆ ಸೋಮಸುಂದರಂ ವೃತ್ತದಿಂದ ಮೃಗಾಲಯದ ದ್ವಾರದವರೆಗೆ (ಜೂ ಮುಂಭಾಗದ ರಸ್ತೆ) ಮರು ಡಾಂಗರೀಕರಣ | 23.00 |
| | 2011ರ ದಸರಾ ಅಂಗವಾಗಿ (ವಾರ್ಡ್‌ವಾರು ರೂ. 10 ಲಕ್ಷ) ಕೈಗೊಳ್ಳಬೇಕಾಗಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳು | |

